**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ದಾವಾ ನಂ.11/2008–2009,**

| **ಅರ್ಜಿದಾರರು:** | **ಎದುರು ಅರ್ಜಿದಾರರು:** |
|---|---|
| ವ್ಯವಸ್ಥಾಪಕರು ವ್ಯಸೇಸಬ್ಯಾಂಕ್ ನಿ., ಕುಪ್ಪಗಡ್ಡೆ, ಕುಪ್ಪಗಡ್ಡೆ (ಅಂಚೆ) ಸೊರಬ ತಾಲ್ಲೂಕು. | 1) ಆರ್. ಗಿರೀಶ್ ಬಿನ್ ರಾಮಚಂದ್ರ ಹೆಗಡೆ, ನಗದು ಗುಮಾಸ್ತ, ವ್ಯಸೇಸಬ್ಯಾಂಕ್ ನಿ., ಕುಪ್ಪೆಗಡ್ಡೆ, ಸೊರಬ ತಾಲ್ಲೂಕು. 2) ರಾಮಚಂದ್ರ ಹೆಗಡೆ ಬಿನ್ ಪರಮೇಶ್ವರ ಹೆಗಡೆ, ವಾಸ ಹಾಗೂ ಅಂಚೆ: ಕುಪ್ಪಗಡ್ಡೆ, ಸೊರಬ ತಾಲ್ಲೂಕು. |

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 (1)ರ ಮೇರೆಗೆ ನೀಡಲಾದ ತೀರ್ಪು ಪೂರ್ವ ಜಪ್ತಿ ಆದೇಶ ಮತ್ತು 103(2)ರ ಮೇರೆಗೆ ನೀಡಲಾದ ನೋಟೀಸ್.

ಅರ್ಜಿದಾರರ ಸಂಘವು ಈ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ವಿವಿಧ ಬಾಬ್ತುಗಳಲ್ಲಿ ಹಣ ದುರುಪಯೋಗ ಮಾಡಿರುವ ರೂ.221585–00 ವಸೂಲಾತಿಗೆ ದಾವಾ ಮಾಡಿರುತ್ತಾರೆ. ಈ ಸಂಬಂಧವಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103ರ ಅಡಿಯಲ್ಲಿ ಅರ್ಜಿ ಸಲ್ಲಿಸಿ ತೀರ್ಮಾನ ಪೂರ್ವ ಜಪ್ತಿ ಆದೇಶ ಕೋರಿರುತ್ತಾರೆ.

ಅರ್ಜಿದಾರರ ವ್ಯಾಜ್ಯದ ಮೊಬಲಗಿಗೆ ತಕ್ಕದಾದ ಮೌಲ್ಯದ ಆಸ್ತಿಯನ್ನು ನ್ಯಾಯಾಲಯ ವ್ಯಾಪ್ತಿಗೆ ಒಳಪಡಿಸುವುದು ಸೂಕ್ತವೆಂದು ತಿಳಿದು ಅರ್ಜಿದಾರರು ಪ್ರಾರ್ಥಿಸಿದಂತೆ ಎದುರು ಅರ್ಜಿದಾರರು ಹೊಂದಿರುವ ಮತ್ತು ಅವರಿಗೆ ಸೇರಿರುವ ಸ್ಥಿರಾಸ್ತಿಯನ್ನು ದಾವೆಯಲ್ಲಿ ನೀಡಬಹುದಾದ ಡಿಕ್ರಿಯು ನಿರರ್ಥಕಗೊಳಿಸಿದ ಉದ್ದೇಶದಿಂದ ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂಬ ಕೋರಿಕೆ ಯುಕ್ತವಾಗಿದೆ ಎಂಬ ಅಂಶವು ಸ್ವತಃ ಮನವರಿಕೆಯಾಗಿದ್ದು ಈ ಕೆಳಕಂಡ ಷರತ್ತು ಪೂರ್ವಕ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಎಆರ್–25:ದಾವಾ:11/2008–2009, ದಿನಾಂಕ:10ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನಲೆಯಲ್ಲಿ ಸಾಗರ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಾದ ಶ್ರೀ ನಾಗೇಶ್ ಎಸ್. ಡೋಂಗರೆ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 103 ರನ್ವಯ ದತ್ತವಾದ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರ ಮೂಲಕ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸುತ್ತಾ ವಾದಿಯವರ ದಾವೆಯಲ್ಲಿ ತೀರ್ಮಾನ ಪೂರ್ವ ಜಪ್ತಿ ಅರ್ಜಿಯನ್ನು ಪರಿಶೀಲಿಸಿ ಹಾಗೂ ದಾವೆಯ ಅಂಶಗಳನ್ನು ನೋಡಿ ಪ್ರತಿವಾದಿ ಹೊಂದಿರುವ ಸ್ಥಿರಾಸ್ತಿಯನ್ನು ತೀರ್ಪು ಪೂರ್ವದಲ್ಲಿ ಮಾರಾಟ ಮಾಡುವ ಸಂಭವವಿರುವ ಕಾರಣ ಮೂಲ ದಾವೆ ಅರ್ಜಿ ವಿಚಾರಣೆಯನ್ನು ಕಾಯ್ದಿರಿಸಿ ಪ್ರತಿವಾದಿ ಕುಟುಂಬವು ಹೊಂದಿರುವ ಕೆಳಕಾಣಿಸಿದ ಆಸ್ತಿಯನ್ನು ತೀರ್ಮಾನ ಪೂರ್ವ ಜಪ್ತಿ ಆದೇಶಕ್ಕೆ ಒಳಪಡಿಸಿದೆ.

**ಷೆಡ್ಯೂಲ್**

ಸೊರಬ ತಾಲ್ಲೂಕು ಕುಪ್ಪಗಡ್ಡೆ ಹೋಬಳಿ, ಕುಪ್ಪಗಡ್ಡೆ ಗ್ರಾಮದ ನಿವೇಶನ ನಂ.22 ಡಿಮ್ಯಾಂಡ್ ಕ್ರ.ಸಂ.359 ಇದರಲ್ಲಿರುವ ನಿವೇಶನದ ಅಳತೆ 60x40 ಅಡಿಗಳು ವಾಸದ ಮನೆ.

ಪೂರ್ವಕ್ಕೆ: ಕಚ್ಚಾರಸ್ತೆ

ಪಶ್ಚಿಮಕ್ಕೆ: ಗ್ರಾಮಪಂಚಾಯಿತಿ ರಸ್ತೆ

ಉತ್ತರಕ್ಕೆ: ಜಿಂಗಾಡಿ ಲಕ್ಷ್ಮಮ್ಮರ ಮನೆ

ದಕ್ಷಿಣಕ್ಕೆ: ಶ್ರೀ ಮಾರುತಿರಾವ್ ರವರ ಮನೆ

ಇಲ್ಲಿರುವ 1ನೇ ಎದುರು ಅರ್ಜಿದಾರರಾದ ಆರ್. ಗಿರೀಶ್ ಇವರ ತಂದೆ 2ನೇ ಎದುರಿ ರಾಮಚಂದ್ರ ಹೆಗಡೆ ಇವರ ಹೆಸರಿನಲ್ಲಿರುವ ಸ್ಥಿರಾಸ್ತಿ, ಸದರಿ ಆಸ್ತಿಯನ್ನು ತೀರ್ಮಾನ ಪೂರ್ವ ಜಪ್ತಿ ಆದೇಶಕ್ಕೆ ಒಳಪಡಿಸಿದೆ.

ಎದುರು ಅರ್ಜಿದಾರರು ಸದರಿ ಆಸ್ತಿಯನ್ನು ಷರತ್ತು ಪೂರ್ವಕ ಜಪ್ತಿ ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯದ ಮೊತ್ತ ಅಥವಾ ದಾವಾ ಮೊತ್ತವನ್ನು ಮುಂಗಡವಾಗಿ ಅರ್ಜಿದಾರ ಸಂಘದಲ್ಲಿ ಠೇವಣಿ ಇಟ್ಟು ರಶೀದಿಯನ್ನು 23.03.2009 ದಿನಾಂಕದೊಳಗಾಗಿ ಈ ಕೆಳಕಂಡ ಸಹಿದಾರರಲ್ಲಿ ಹಾಜರುಪಡಿಸುವ ಮೂಲಕ ಜಪ್ತಿ ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಪ್ರತಿವಾದಿಗೆ ನೋಟೀಸ್ ನೀಡಿದೆ. ಈ ಆದೇಶದ ಷರತ್ತನ್ನು ಪಾಲಿಸಲು ವಿಫಲವಾದಲ್ಲಿ ಈ ತೀರ್ಪು ಪೂರ್ವಕ ಜಪ್ತಿ ಆಜ್ಞೆಯು ಯಥಾವತ್ತಾಗಿ ಸ್ಥಿರೀಗೊಳ್ಳುವುದು ಮತ್ತು ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

ಈ ಆದೇಶವನ್ನು ತೆರೆದ ನ್ಯಾಯಾಲಯದಲ್ಲಿ ಈ ದಿನ 10.02.2009ರಂದು ಘೋಷಿಸಿದೆ.

ಪಿ.ಆರ್.191 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಸಾಗರ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀಮತಿ ಜಯಶ್ರೀ ಅಂಬಾದಾಸ ರಾಠೋಡ** ರವರು **ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಗುಲ್ಬರ್ಗಾ ತಾಲ್ಲೂಕಿನ ಕಮಲಾಪುರ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ.ಜಿತಾಪ/252/05–06, ದಿನಾಂಕ:**16.05.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**12.06.2006**.

3) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರದ ಸಂಖ್ಯೆ:ಚುನಾವಣೆ.ಗ್ರಾಪಚು:44:06–07, ದಿನಾಂಕ:**15.10.2008**.

**ಪ್ರಸ್ತಾವನೆ:**

**ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ ಕಮಲಾಪುರ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ಜಯಶ್ರೀ ಅಂಬಾದಾಸ ರಾಠೋಡ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಗುಲ್ಬರ್ಗಾ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**12.06.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ 5(01)/ ಟಿಜಡ್‌ಪಿ/2009, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವಂತೆ **ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ ಕಮಲಾಪುರ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಜಯಶ್ರೀ ಅಂಬಾದಾಸ ರಾಠೋಡ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀ ಲಕ್ಷ್ಮೀಕಾಂತ ಹುಚ್ಚಪ್ಪ** ರವರು **ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಗುಲ್ಬರ್ಗಾ ತಾಲ್ಲೂಕಿನ ಕುಸನೂರ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ.ಜಿತಾಪ/252/05–06, ದಿನಾಂಕ:**16.05.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**12.06.2006**.

3) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರದ ಸಂಖ್ಯೆ:ಚುನಾವಣೆ.ಗ್ರಾಪಚು:44:06–07, ದಿನಾಂಕ:**15.10.2008**.

**ಪ್ರಸ್ತಾವನೆ:**

**ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ ಕುಸನೂರ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀ ಲಕ್ಷ್ಮೀಕಾಂತ ಹುಚ್ಚಪ್ಪ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಗುಲ್ಬರ್ಗಾ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**12.06.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ 5(02)/ ಟಿಜಡ್‌ಪಿ/2009, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವಂತೆ **ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ ಕುಸನೂರ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀ ಲಕ್ಷ್ಮೀಕಾಂತ ಹುಚ್ಚಪ್ಪ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀ ಕೇದಾರನಾಥ ಸೋಮಾಣಿ ಶ್ರೀಕಿಶನ್** ರವರು **ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಗುಲ್ಬರ್ಗಾ ತಾಲ್ಲೂಕಿನ ಖಣದಾಳ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ.ಜಿತಾಪ/252/05–06, ದಿನಾಂಕ:**16.05.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**12.06.2006**.

3) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರದ ಸಂಖ್ಯೆ:ಚುನಾವಣೆ.ಗ್ರಾಪಚು:44:06–07, ದಿನಾಂಕ:**15.10.2008.**

**ಪ್ರಸ್ತಾವನೆ:**

**ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ ಖಣದಾಳ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀ ಕೇದಾರನಾಥ ಸೋಮಾಣಿ ಶ್ರೀಕಿಶನ್** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಗುಲ್ಬರ್ಗಾ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**12.06.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ 5(03)/ ಟಿಜಡ್‌ಪಿ/2009, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವಂತೆ **ಗುಲ್ಬರ್ಗಾ ಜಿಲ್ಲಾ ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ ಖಣದಾಳ ಜಿಲ್ಲಾ ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀ ಕೇದಾರನಾಥ ಸೋಮಾಣಿ ಶ್ರೀಕಿಶನ್** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಪಿ.ಆರ್.192 ಆಯುಕ್ತರು, ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀಮತಿ ಕುಶಾಲಾಬಾಯಿ ಗಂಡ ಮಲ್ಲಿನಾಥ** ರವರು **ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಗುಲ್ಬರ್ಗಾ ತಾಲ್ಲೂಕಿನ 21–ಪಟ್ಟಣ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ.ಜಿತಾಪ/252/05–06, ದಿನಾಂಕ:**16.05.2006.**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**12.06.2006.**

3) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರದ ಸಂಖ್ಯೆ:ಚುನಾವಣೆ.ಗ್ರಾಪಚು:44:06–07, ದಿನಾಂಕ:**12.06.2008.**

**ಪ್ರಸ್ತಾವನೆ:**

**ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ 21–ಪಟ್ಟಣ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ಕುಶಾಲಾಬಾಯಿ ಗಂಡ ಮಲ್ಲಿನಾಥ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಗುಲ್ಬರ್ಗಾ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**12.06.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ 6(1)/ ಟಿಜಡ್‌ಪಿ/2009, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವಂತೆ **ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ 21–ಪಟ್ಟಣ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಕುಶಾಲಾಬಾಯಿ ಗಂಡ ಮಲ್ಲಿನಾಥ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀಮತಿ ಲಕ್ಷ್ಮೀಬಾಯಿ ಕೋಂ ರಾಜೇಂದ್ರ** ರವರು **ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಗುಲ್ಬರ್ಗಾ ತಾಲ್ಲೂಕಿನ 21–ಪಟ್ಟಣ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ.ಜಿತಾಪ/252/05–06, ದಿನಾಂಕ:**16.05.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**12.06.2006**.

3) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರದ ಸಂಖ್ಯೆ:ಚುನಾವಣೆ.ಗ್ರಾಪಚು:44:06–07, ದಿನಾಂಕ:**12.06.2008**.

**ಪ್ರಸ್ತಾವನೆ:**

**ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ 21–ಪಟ್ಟಣ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ಲಕ್ಷ್ಮೀಬಾಯಿ ಕೋಂ ರಾಜೇಂದ್ರ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಗುಲ್ಬರ್ಗಾ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**12.06.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ 6(2)/ ಟಿಜಡ್‌ಪಿ/2009, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವಂತೆ **ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ 21–ಪಟ್ಟಣ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಲಕ್ಷ್ಮೀಬಾಯಿ ಕೋಂ ರಾಜೇಂದ್ರ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಆಯುಕ್ತರು, ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ:** **ಶ್ರೀ ಗೋಪಿನಾಥ ಪೀಸು** ರವರು **ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005 ರಲ್ಲಿ **ಗುಲ್ಬರ್ಗಾ ತಾಲ್ಲೂಕಿನ 24–ಸೊಂತ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ.ಜಿತಾಪ/252/05–06, ದಿನಾಂಕ:**16.05.2006**.

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜೆಡ್‌ಪಿ/2005, ದಿನಾಂಕ:**12.06.2006**.

3) ಜಿಲ್ಲಾಧಿಕಾರಿಗಳು, **ಗುಲ್ಬರ್ಗಾ** ಜಿಲ್ಲೆ ರವರ ಪತ್ರದ ಸಂಖ್ಯೆ:ಚುನಾವಣೆ.ಗ್ರಾಪಚು:44:06–07, ದಿನಾಂಕ:**12.06.2008**.

**ಪ್ರಸ್ತಾವನೆ:**

**ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ 24–ಸೊಂತ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀ ಗೋಪಿನಾಥ ಪೀಸು** ರವರು

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಗುಲ್ಬರ್ಗಾ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್‌ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2) ರಂತೆ ದಿನಾಂಕ:**12.06.2006** ರ ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ 6(3)/ ಟಿಜಡ್‌ಪಿ/2009, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2009**

ಮೇಲೆ ವಿವರಿಸಿರುವಂತೆ **ಗುಲ್ಬರ್ಗಾ ತಾಲ್ಲೂಕು ಪಂಚಾಯತಿ** ಸದಸ್ಯ ಸ್ಥಾನಕ್ಕೆ **ಗುಲ್ಬರ್ಗಾ ತಾಲ್ಲೂಕಿನ 24–ಸೊಂತ ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀ ಗೋಪಿನಾಥ ಪೀಸು** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**

ಪಿ.ಆರ್.193 ಆಯುಕ್ತರು, ರಾಜ್ಯ ಚುನಾವಣಾ ಆಯೋಗ.

**ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ**

**ನಂ.ತಾಂ(2).ನಮಾ.(ನೆ)/12/2008–09, ದಿನಾಂಕ:16ನೇ ಫೆಬ್ರವರಿ, 2009**

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂಇ 280 ಭೂದಾಸ 2008 ಬೆಂಗಳೂರು, ದಿನಾಂಕ:21.01.2009ರ ಮೇರೆಗೆ ನಿರ್ದೇಶಿಸಿದಂತೆ ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣವಲಯ, ಮೈಸೂರು ಆದ ನಾನು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 148(1)ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ನಗರ ಮಾಪನ ವ್ಯಾಪ್ತಿಯಲ್ಲಿ ಈ ಕೆಳಗಿನ ಅನುಸೂಚಿ (ಷೆಡ್ಯೂಲ್)ಯಲ್ಲಿ ವಿವರಿಸಿರುವ ಆಸ್ತಿಗಳು ನೆಲಮಂಗಲ ನಗರ ಮಾಪನ ಪರಿಮಿತಿಯಲ್ಲಿ ನಗರ ಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಇಲ್ಲದಂತೆ ಬರುತ್ತವೆ ಎಂದು ಘೋಷಿಸುತ್ತೇನೆ.

ನೆಲಮಂಗಲ ನಗರ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರಗಳನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.

2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ನಗರ ಮಾಪನ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

3) ಮುಖ್ಯಾಧಿಕಾರಿಗಳು, ಪುರಸಭೆ ಕಾರ್ಯಾಲಯ, ನೆಲಮಂಗಲ.

ಅನುಸೂಚಿ (ಷೆಡ್ಯೂಲ್)

ನೆಲಮಂಗಲ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಆಸ್ತಿಗಳ ವಿವರ ತೋರಿಸುವ ತಃಖ್ತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮದ ಹೆಸರು | ಸರ್ವೆ ನಂಬರು, ರಸ್ತೆ ಖರಾಬು ನಂಬರ್ ಗ್ರಾಮಠಾಣ ಸರ್ಕಾರಿ ಬಂಜರು ಜಮೀನು | ವಿಸ್ತೀರ್ಣ ಎಕರೆ–ಗುಂಟೆ | ಷರಾ |
|---|---|---|---|---|---|---|
| 1. | ನೆಲಮಂಗಲ ತಾಲ್ಲೂಕು | ಕಸಬಾ | ನೆಲಮಂಗಲ | ಸ.ನಂ.1 ರಿಂದ 227ರ ವರೆಗೆ<br>ಗ್ರಾಮಠಾಣ ರಸ್ತೆ, ವಗೈರೆ<br>ಒಟ್ಟು ವಿಸ್ತೀರ್ಣ | 874–36<br>92–14<br>967–10 | ಪೂರ್ತಿ ಗ್ರಾಮ |
| 2. | ನೆಲಮಂಗಲ ತಾಲ್ಲೂಕು | ಕಸಬಾ | ವಾಜರಹಳ್ಳಿ | ಸ.ನಂ.1 ರಿಂದ 106ರ ವರೆಗೆ<br>ಗ್ರಾಮಠಾಣ ರಸ್ತೆ, ವಗೈರೆ<br>ಒಟ್ಟು ವಿಸ್ತೀರ್ಣ | 460–31<br>10–10<br>471–01 | ಪೂರ್ತಿ ಗ್ರಾಮ |
| 3. | ನೆಲಮಂಗಲ ತಾಲ್ಲೂಕು | ಕಸಬಾ | ನರಸಿಪಾಳ್ಯ | ಸ.ನಂ.1 ರಿಂದ 13ರ ವರೆಗೆ<br>ಒಟ್ಟು ವಿಸ್ತೀರ್ಣ | 59–11<br>59–11 | ಪೂರ್ತಿ ಗ್ರಾಮ |
| 4. | ನೆಲಮಂಗಲ ತಾಲ್ಲೂಕು | ಕಸಬಾ | ಅರಿಶಿನಕುಂಟೆ | ಸ.ನಂ.1 ರಿಂದ 298ರ ವರೆಗೆ<br>ಗ್ರಾಮಠಾಣ ರಸ್ತೆ, ವಗೈರೆ<br>ಒಟ್ಟು ವಿಸ್ತೀರ್ಣ | 1287–05<br>47–04<br>1334–09 | ಪೂರ್ತಿ ಗ್ರಾಮ |
| 5. | ನೆಲಮಂಗಲ ತಾಲ್ಲೂಕು | ಕಸಬಾ | ಮಲ್ಲಾಪುರ | ಸ.ನಂ.1 ರಿಂದ 122ರ ವರೆಗೆ<br>ಗ್ರಾಮಠಾಣ ರಸ್ತೆ, ವಗೈರೆ<br>ಒಟ್ಟು ವಿಸ್ತೀರ್ಣ | 494–21<br>25–07<br>519–28 | ಪೂರ್ತಿ ಗ್ರಾಮ |
| 6. | ನೆಲಮಂಗಲ ತಾಲ್ಲೂಕು | ಕಸಬಾ | ಜಕ್ಕಸಂದ್ರ | ಸ.ನಂ.1 ರಿಂದ 93ರ ವರೆಗೆ<br>ಗ್ರಾಮಠಾಣ ರಸ್ತೆ, ವಗೈರೆ<br>ಒಟ್ಟು ವಿಸ್ತೀರ್ಣ | 602–18<br>13–16<br>615–34 | ಪೂರ್ತಿ ಗ್ರಾಮ |
| 7. | ನೆಲಮಂಗಲ ತಾಲ್ಲೂಕು | ಕಸಬಾ | ವಿಶ್ವೇಶ್ವರಪುರ | ಸ.ನಂ.1 ರಿಂದ 70ರ ವರೆಗೆ<br>ಗ್ರಾಮಠಾಣ ರಸ್ತೆ, ವಗೈರೆ<br>ಒಟ್ಟು ವಿಸ್ತೀರ್ಣ | 383–19<br>18–14<br>401–33 | ಪೂರ್ತಿ ಗ್ರಾಮ |
| 8. | ನೆಲಮಂಗಲ ತಾಲ್ಲೂಕು | ಕಸಬಾ | ಬಸವನಹಳ್ಳಿ | ಸ.ನಂ.1 ರಿಂದ 103ರ ವರೆಗೆ<br>ಗ್ರಾಮಠಾಣ ರಸ್ತೆ, ವಗೈರೆ<br>ಒಟ್ಟು ವಿಸ್ತೀರ್ಣ | 539–19<br>26–26<br>566–05 | ಪೂರ್ತಿ ಗ್ರಾಮ |
| | | | | ಅಂತು 8 ಗ್ರಾಮಗಳ ಒಟ್ಟು ವಿಸ್ತೀರ್ಣ | 4935–11 | |

ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರ ಮಾಪನ, ದಕ್ಷಿಣ ವಲಯ, ಮೈಸೂರು.

**ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ**

**ನಂ.ತಾಂ(2).ನಮಾ.(ಹೊ)/12/2008–09, ದಿನಾಂಕ:16ನೇ ಫೆಬ್ರವರಿ, 2009**

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂಇ 280 ಭೂದಾಸ 2008 ಬೆಂಗಳೂರು, ದಿನಾಂಕ:21.01.2009ರ ಮೇರೆಗೆ ನಿರ್ದೇಶಿಸಿದಂತೆ ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣವಲಯ, ಮೈಸೂರು ಆದ ನಾನು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 148(1)ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ತಾಲ್ಲೂಕು, ಹೊಸಕೋಟೆ ನಗರ ವ್ಯಾಪ್ತಿಯಲ್ಲಿ ಈ ಕೆಳಗಿನ ಅನುಸೂಚಿ (ಷೆಡ್ಯೂಲ್)ಯಲ್ಲಿ ವಿವರಿಸಿರುವ ಆಸ್ತಿಗಳು ಹೊಸಕೋಟೆ ನಗರ ಮಾಪನ ಪರಿಮಿತಿಯಲ್ಲಿ ನಗರ ಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಇಲ್ಲದಂತೆ ಬರುತ್ತವೆ ಎಂದು ಘೋಷಿಸುತ್ತೇನೆ.

ಹೊಸಕೋಟೆ ನಗರ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರಗಳನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.

2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು ಹಾಗೂ ನಗರ ಮಾಪನ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

3) ಮುಖ್ಯಾಧಿಕಾರಿಗಳು, ಪುರಸಭೆ ಕಾರ್ಯಾಲಯ, ಹೊಸಕೋಟೆ.

**ಅನುಸೂಚಿ (ಷೆಡ್ಯೂಲ್)**

**ಹೊಸಕೋಟೆ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಆಸ್ತಿಗಳ ವಿವರ ತೋರಿಸುವ ತಃಖ್ತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮದ ಹೆಸರು | ಸರ್ವೆ ನಂಬರು, ರಸ್ತೆ ಖರಾಬು ನಂಬರ್ ಗ್ರಾಮಠಾಣ ಸರ್ಕಾರಿ ಬಂಜರು ಜಮೀನು | ವಿಸ್ತೀರ್ಣ ಎಕರೆ–ಗುಂಟೆ | ಷರಾ |
|---|---|---|---|---|---|---|
| 1. | ಹೊಸಕೋಟೆ | ಕಸಬಾ | ದಂಡುಪಾಳ್ಯ | 1 ರಿಂದ 17ರ ವರೆಗೆ | 25–10 | ಪೈಕಿ |
| | | | | 20 ರಿಂದ 23ರವರೆಗೆ | 3–34 | ಗ್ರಾಮ |
| | | | | 69 ರಿಂದ 162 ರವರೆಗೆ | 320–21 | |
| | | | | 171 ರಿಂದ 176ರ ವರೆಗೆ | 14–10 | |
| | | | | 182 ರಿಂದ 210ರವರೆಗೆ | 57–06 | |
| | | | | ಗ್ರಾಮಠಾಣ ರಸ್ತೆ ವಗೈರೆ | 60–17 | |
| | | | | **ಒಟ್ಟು ವಿಸ್ತೀರ್ಣ** | 481–18 | |
| 2. | ಹೊಸಕೋಟೆ | ಕಸಬಾ | ಹೊಸಕೋಟೆ | 1 ರಿಂದ 500 ರವರೆಗೆ | 1283–24 $^{1}/_{2}$ | ಪೈಕಿ |
| | | | | 512 ರಿಂದ 560 ರವರೆಗೂ | 33/39 $^{1}/_{2}$ | ಗ್ರಾಮ |
| | | | | ಗ್ರಾಮಠಾಣ ರಸ್ತೆ ವಗೈರೆ | 244–36 | |
| | | | | **ಒಟ್ಟು ವಿಸ್ತೀರ್ಣ** | 1562–20 | |

ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರ ಮಾಪನ, ದಕ್ಷಿಣ ವಲಯ, ಮೈಸೂರು.

**ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ**

**ನಂ.ತಾಂ(2).ನಮಾ.(ಮಾ)/12/2008–09, ದಿನಾಂಕ:16ನೇ ಫೆಬ್ರವರಿ, 2009**

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂಇ 280 ಭೂದಾಸ 2008 ಬೆಂಗಳೂರು, ದಿನಾಂಕ:21.01.2009ರ ಮೇರೆಗೆ ನಿರ್ದೇಶಿಸಿದಂತೆ ಮೈಸೂರು ನಗರ ಮಾಪನ, ದಕ್ಷಿಣವಲಯದ ಜಂಟಿ ನಿರ್ದೇಶಕನಾದ ನಾನು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 148(1)ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಮಾಗಡಿ ನಗರ ಮಾಪನ ವ್ಯಾಪ್ತಿಯಲ್ಲಿ ಈ ಕೆಳಗಿನ ಅನುಸೂಚಿ (ಷೆಡ್ಯೂಲ್)ಯಲ್ಲಿ ವಿವರಿಸಿರುವ ಆಸ್ತಿಗಳು ಮಾಗಡಿ ನಗರ ಮಾಪನ ಪರಿಮಿತಿಯಲ್ಲಿ ಬರುತ್ತವೆ. ಈ ಆಸ್ತಿಗಳನ್ನು ನಗರ ಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಇಲ್ಲದಂತೆ ಬರುತ್ತವೆ ಎಂದು ಘೋಷಿಸುತ್ತೇನೆ.

ಮಾಗಡಿ ನಗರ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರಗಳನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.

2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ರಾಮನಗರ ಜಿಲ್ಲೆ, ರಾಮನಗರ.

3) ಮುಖ್ಯಾಧಿಕಾರಿಗಳು, ಪುರಸಭೆ ಕಾರ್ಯಾಲಯ, ಮಾಗಡಿ

ಅನುಸೂಚಿ (ಷೆಡ್ಯೂಲ್)

ಮಾಗಡಿ ತಾಲ್ಲೂಕಿನ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಆಸ್ತಿಗಳ ವಿವರ ತೋರಿಸುವ ತಃಖ್ತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮದ ಹೆಸರು | ಸರ್ವೆ ನಂಬರು, ರಸ್ತೆ ಖರಾಬು ನಂಬರ್ ಗ್ರಾಮಠಾಣ ಸರ್ಕಾರಿ ಬಂಜರು ಜಮೀನು | ವಿಸ್ತೀರ್ಣ ಎಕರೆ ಗುಂಟೆ | ಷರಾ |
|---|---|---|---|---|---|---|
| 1. | ಮಾಗಡಿ | ಕಸಬ | ಮಾಗಡಿ | ಸ.ನಂ. 1 ರಿಂದ 116, 118, 153 ರಿಂದ 157, 168, 169, 170, 171, 172 ರಿಂದ 197, 198, 199 ರಿಂದ 205, 207, 208, 210, 211, 212, 213, 215, 216, 217 ರಿಂದ 228, 238 ರಿಂದ 268, 270, 271, 272, 273, ಊರು ವಗೈರೆ<br>ಒಟ್ಟು ವಿಸ್ತೀರ್ಣ | 567–06<br>58–00<br>625–06 | |
| 2. | ಮಾಗಡಿ | ಕಸಬ | ಬೈಚಾಪುರ | ಸ.ನಂ.1 ರಿಂದ 25 ರವರೆಗೆ 30, 31, 60, 61<br>ಊರು ವಗೈರೆ<br>ಒಟ್ಟು ವಿಸ್ತೀರ್ಣ | 191–16<br>3–30<br>195–06 | |
| 3. | ಮಾಗಡಿ | ಕಸಬ | ತಿರುಮಲೆ | ಸ.ನಂ.1 ರಿಂದ 4, 25 ರಿಂದ 35, 37, 51 ರಿಂದ 153, 162, 165, 166, 167, 168, 169, 175, 176, 178, 208, 209ರವರೆಗೆ<br>ಊರು ವಗೈರೆ<br>ಒಟ್ಟು ವಿಸ್ತೀರ್ಣ | 628–26<br>51–05<br>679–31 | |
| 4. | ಮಾಗಡಿ | ಕಸಬ | ಕರಗದಹಳ್ಳಿ | ಸ.ನಂ.4 ರಿಂದ 10ರವರೆಗೆ<br>ಒಟ್ಟು ವಿಸ್ತೀರ್ಣ | 25–37<br>25–37 | |
| 5. | ಮಾಗಡಿ | ಕಸಬ | ಹೊಸಹಳ್ಳಿ | ಸ.ನಂ.11 ರಿಂದ 70 ರವರೆಗೆ<br>ಊರು, ವಗೈರೆ<br>ಒಟ್ಟು ವಿಸ್ತೀರ್ಣ | 219–13<br>20–26<br>239–39 | |
| 6. | ಮಾಗಡಿ | ಕಸಬ | ವಡ್ಡರಪಾಳ್ಯ | ಸ.ನಂ.2 ರಿಂದ 6, 35, 36, 37, 38, 39, 42, 44 ರಿಂದ 59 ರವರೆಗೆ ಊರು ವಗೈರೆ.<br>ಒಟ್ಟು ವಿಸ್ತೀರ್ಣ | 126–27<br>1–34<br>128–21 | |

ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರ ಮಾಪನ, ದಕ್ಷಿಣ ವಲಯ, ಮೈಸೂರು.

**ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ**

**ನಂ.ತಾಂ(2).ನಮಾ.(ಕ)/12/2008–09, ದಿನಾಂಕ:16ನೇ ಫೆಬ್ರವರಿ, 2009**

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂಇ 280 ಭೂದಾಸ 2008 ಬೆಂಗಳೂರು, ದಿನಾಂಕ:21.01.2009ರ ಮೇರೆಗೆ ನಿರ್ದೇಶಿಸಿದಂತೆ ಮೈಸೂರು ನಗರ ಮಾಪನ, ದಕ್ಷಿಣವಲಯ, ಜಂಟಿ ನಿರ್ದೇಶಕರಾದ ನಾನು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 148(1)ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕನಕಪುರ ನಗರ ಮಾಪನ ವ್ಯಾಪ್ತಿಯಲ್ಲಿ ಈ ಕೆಳಗಿನ ಅನುಸೂಚಿ (ಷೆಡ್ಯೂಲ್)ಯಲ್ಲಿ ವಿವರಿಸಿರುವ ಆಸ್ತಿಗಳು ಕನಕಪುರ ನಗರ ಪರಿಮಿತಿಯಲ್ಲಿ ಬರುತ್ತವೆ. ಈ ಆಸ್ತಿಗಳನ್ನು ನಗರ ಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಇಲ್ಲದಂತೆ ಬರುತ್ತವೆ ಎಂದು ಘೋಷಿಸುತ್ತೇನೆ.

ಕನಕಪುರ ನಗರ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರಗಳನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.

2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ರಾಮನಗರ ಜಿಲ್ಲೆ, ರಾಮನಗರ.

3) ಮುಖ್ಯಾಧಿಕಾರಿಗಳು, ಪುರಸಭೆ ಕಾರ್ಯಾಲಯ, ಕನಕಪುರ.

**ಅನುಸೂಚಿ (ಷೆಡ್ಯೂಲ್)**

**ಕನಕಪುರ ತಾಲ್ಲೂಕಿನ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಆಸ್ತಿಗಳ ವಿವರ ತೋರಿಸುವ ತಃಖ್ತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮದ ಹೆಸರು | ಸರ್ವೆ ನಂಬರು, ರಸ್ತೆ ಖರಾಬು ನಂಬರ್ ಗ್ರಾಮಠಾಣ ಸರ್ಕಾರಿ ಬಂಜರು ಜಮೀನು | ವಿಸ್ತೀರ್ಣ ಎಕರೆ ಗುಂಟೆ | ಷರಾ |
|---|---|---|---|---|---|---|
| 1. | ಕನಕಪುರ | ಕಸಬ | ಕನಕಪುರ | ಸ.ನಂ.1 ರಿಂದ 62, 186 ರಿಂದ 190, ಸ.ನಂ.193 ರಿಂದ 195, 197, 206 ರಿಂದ 219, 222 ರಿಂದ 228, 243 ರಿಂದ 257, 259 ರಿಂದ 271, 273, 277 ರಿಂದ 296, 426 ರಿಂದ 430, 432, 434 ರಿಂದ 439, 441 ರಿಂದ 450, 470, 484, 485, 489, 490, 491, 494 ರಿಂದ 497, 499, 501, 505 ರಿಂದ 506, 538, 544 ರಿಂದ 589, 591, 602 ರಿಂದ 635, 649 ರಿಂದ 676, 679 ರಿಂದ 709, 711, 728, 738 ರಿಂದ 739, 753, 769, 785, 790 ರಿಂದ 793ರ ವರೆಗೆ. | 1257–26 | ಪೈಕಿ ಗ್ರಾಮ |
| | | | | ಗ್ರಾಮಠಾಣ ರಸ್ತೆ ಹಳ್ಳ, ನದಿ, ಓಣಿ, ವಗೈರೆ | 201–22 | |
| | | | | ಒಟ್ಟು ವಿಸ್ತೀರ್ಣ | 1459–08 | |
| 2. | ಕನಕಪುರ | ಕಸಬ | ಶಿವನಹಳ್ಳಿ | ಸ.ನಂ.41 ರಿಂದ 42 ರವರೆಗೆ ಸ.ನಂ.70 ರಿಂದ 102, 108 ರಿಂದ 115, 413 ರಿಂದ 414, 429, 482 ರಿಂದ 484, 480, 474 ರಿಂದ 479, 468 | 233–33 | ಪೈಕಿ ಗ್ರಾಮ |
| | | | | ರಸ್ತೆ ಹಳ್ಳ ವಗೈರೆ | 8–02 | |
| | | | | ಒಟ್ಟು ವಿಸ್ತೀರ್ಣ | 241–35 | |
| 3. | ಕನಕಪುರ | ಕಸಬ | ಕಲ್ಲಹಳ್ಳಿ | ರೀ ಸ.ನಂ.32 ರಿಂದ 39ರವರೆಗೆ | | ಪೈಕಿ ಗ್ರಾಮ |
| | | | | ರೀ ಸ.ನಂ.40 ರಿಂದ 42ರವರೆಗೆ | 131–35 | |
| | | | | ರೀ ಸ.ನಂ.50 ರಿಂದ 55ರವರೆಗೆ | 1–05 | |
| | | | | ರೀ ಸ.ನಂ.65, 67, 69 | 130–30 | |
| | | | | ರೀ ಸ.ನಂ.70 ರಿಂದ 78ರವರೆಗೆ | | |
| | | | | ರೀ ಸ.ನಂ.95 ರಿಂದ 98 ರವರೆಗೆ | | |
| | | | | ರಸ್ತೆ, ಹಳ್ಳ ವಗೈರೆ. | 14–13 | |
| | | | | ಒಟ್ಟು ವಿಸ್ತೀರ್ಣ | 145–03 | |

ಭೂದಾಖಲೆಗಳ ಜಂಟಿ ನಿರ್ದೇಶಕರು,
ನಗರ ಮಾಪನ, ದಕ್ಷಿಣ ವಲಯ, ಮೈಸೂರು.

**ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರುರವರ ಕಛೇರಿ**

**ನಂ.ತಾಂ(2).ನಮಾ.(ಅ)/12/2008–09, ದಿನಾಂಕ:16ನೇ ಫೆಬ್ರವರಿ, 2009**

ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂಇ 280 ಭೂದಾಸ 2008 ಬೆಂಗಳೂರು, ದಿನಾಂಕ:21.01.2009ರ ಮೇರೆಗೆ ನಿರ್ದೇಶಿಸಿದಂತೆ ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು ಆದ ನಾನು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 148(1)ರ ಕೆಳಗೆ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಆನೇಕಲ್ ನಗರ ಮಾಪನ ವ್ಯಾಪ್ತಿಯಲ್ಲಿ ಈ ಕೆಳಗಿನ ಅನುಸೂಚಿ (ಷೆಡ್ಯೂಲ್)ಯಲ್ಲಿ ವಿವರಿಸಿರುವ ಆಸ್ತಿಗಳು ಆನೇಕಲ್ ನಗರ ಮಾಪನ ಪರಿಮಿತಿಯಲ್ಲಿ ಬರುತ್ತವೆ. ಈ ಆಸ್ತಿಗಳನ್ನು ನಗರ ಮಾಪನ ಉದ್ದೇಶಕ್ಕೆ ಹಾಗೂ ಗಡಿ ನಿರ್ಧಾರಕ್ಕೆ ಈಗ ಇರುವ ಹಕ್ಕು ಬಾಧ್ಯತೆಗಳಿಗೆ ಧಕ್ಕೆ ಇಲ್ಲದಂತೆ ಬರುತ್ತವೆ ಎಂದು ಘೋಷಿಸುತ್ತೇನೆ.

ಆನೇಕಲ್ ನಗರ ವ್ಯಾಪ್ತಿಗೆ ಒಳಪಡುವ ಜಮೀನುಗಳ ವಿವರಗಳನ್ನು ತೋರಿಸುವ ನಕ್ಷೆಯನ್ನು ಈ ಕೆಳಕಂಡ ಕಛೇರಿಗಳಲ್ಲಿ ಕೆಲಸದ ವೇಳೆಯಲ್ಲಿ ಸಾರ್ವಜನಿಕರ ವೀಕ್ಷಣೆಗೆ ಇಡಲಾಗಿದೆ.

1) ಭೂದಾಖಲೆಗಳ ಜಂಟಿ ನಿರ್ದೇಶಕರು, ನಗರ ಮಾಪನ, ದಕ್ಷಿಣ ವಲಯ, ಮೈಸೂರು.

2) ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಹಾಗೂ ನಗರ ಮಾಪನ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

3) ಮುಖ್ಯಾಧಿಕಾರಿಗಳು, ಪುರಸಭೆ ಕಾರ್ಯಾಲಯ, ಆನೇಕಲ್.

**ಅನುಸೂಚಿ (ಷೆಡ್ಯೂಲ್)**

**ಆನೇಕಲ್ ತಾಲ್ಲೂಕಿನ ನಗರ ಮಾಪನ ವ್ಯಾಪ್ತಿಗೆ ಒಳಪಡುವ ಆಸ್ತಿಗಳ ವಿವರಗಳನ್ನು ತೋರಿಸುವ ತಃಖ್ತೆ**

**ಬೆಂಗಳೂರು ಗ್ರಾಮಾಂತರ ಜಿಲ್ಲೆ**

| ಕ್ರ. ಸಂ. | ತಾಲ್ಲೂಕು | ಹೋಬಳಿ | ಗ್ರಾಮದ ಹೆಸರು | ಸರ್ವೆ ನಂಬರು, ರಸ್ತೆ ಖರಾಬು ನಂಬರ್ ಗ್ರಾಮಠಾಣ ಸರ್ಕಾರಿ ಬಂಜರು ಜಮೀನು | ವಿಸ್ತೀರ್ಣ ಎಕರೆ ಗುಂಟೆ | ಷರಾ |
|---|---|---|---|---|---|---|
| 1. | ಆನೇಕಲ್ | ಕಸಬಾ | ಆನೇಕಲ್ | ಸ.ನಂ.1 ರಿಂದ 19, 51, 52; 54 ರಿಂದ 90; 95 ರಿಂದ 111; 113 ರಿಂದ 144, 158, 160, 163 ರಿಂದ 167, 171; 172 ರಿಂದ 226, 237, 241, 242, 245 ರಿಂದ 301, 305, 319, 320, 326 ರಿಂದ 332, 334 ರಿಂದ 336, 341 ರಿಂದ 348, 560 ರಿಂದ 566, 569, 586, 587, 588, 591, 592 | 765–14 | |
| | | | | ಗ್ರಾಮ ಠಾಣ, ರಸ್ತೆ ವಗೈರೆ | 189–02 | |
| 2. | ಆನೇಕಲ್ | ಕಸಬಾ | ಹಾಲ್ದೇನಹಳ್ಳಿ | 1, 63 ರಿಂದ 66, 71 ರಿಂದ 80, 90 ರಿಂದ 94, 96 | 82–21 | |
| | | | | ಗ್ರಾಮಠಾಣ, ರಸ್ತೆ, ವಗೈರೆ | 10–38 | |

ಭೂದಾಖಲೆಗಳ ಜಂಟಿ ನಿರ್ದೇಶಕರು,
ಪಿ.ಆರ್.174 ನಗರ ಮಾಪನ, ದಕ್ಷಿಣ ವಲಯ, ಮೈಸೂರು.

**OFFICE OF THE 10TH ADDITIONAL CHIEF METROPOLITAN MAGISTRATE, MAYOHALL UNIT, BANGALORE**

**DRAFT NOTIFICATION**

**To.No.194/08, Dated:24th October, 2008**

It is hereby notified to the General Public that the following unclaimed vehicles are in the custody of Byappanahalli Police, Bangalore which are seized under various C.Misc cases.

| Sl. No. | C.Misc No.and PF No. | Type of Vehicle | Registration No. Chassis No., Engine No. |
|---|---|---|---|
| 1. | 537/07 77/07 | Kinetic Honda | KA-03-Y-5633 NIFRR006370, NIERR002223 |
| 2. | 538/07 78/07 | Bajaj Chethak | KA-03-J-3933 06DF378167, 06DF377879 |
| 3. | 539/07 79-07 | Yezdi | CAH-3450 066576, 160278 |
| 4. | 540/07 80/07 | Hero Puch | KA-05-K-7598, B212323, B210635 |
| 5. | 542/07 82/07 | Activa Honda | KA-19-W-1234 ME4AF085C8243825, JF08E0250902. |
| 6. | 543/07 83/07 | Kinetic Honda | KA-01-L-2548, 71976, 713344 |
| 7. | 545/07 85/07 | TVS XL Super | KA-03-EF-8823 3206E609438, B1206M597396 |
| 8. | 546/07 86/07 | Yamaha | CAY-9272 ILI0924242, ILI0924242 |

Any person/s having right to claim the above vehicles shall approach the Byappanahalli Police with necessary documents within six Months from the date of this publication, failing which the above vehicles will be confiscated to GOVERNMENT.

Any claims received after the due date will not be entertained.

10th Addl. Chief Metropolitan,
Magistrate, Mayohall Unit, Bangalore.

PR-194

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2, ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್–4/2009 ಎಫ್: ದಿನಾಂಕ:19ನೇ ಫೆಬ್ರವರಿ, 2009**

**ಅರ್ಜಿದಾರರು:**

1) ಬಾಬು ನಾಯ್ಕ್, ಮಹಾಲಿಂಗ ನಾಯ್ಕರ ಮಗ.

2) ಶ್ರೀಮತಿ ಕಮಲ, ಮೀನಾರತಿ ಮನೆ, ಕುಟ್ರುಪಾಡಿಹಳ್ಳಿ, ಕಡಲು ಪೋಸ್ಟ್, ಪುತ್ತೂರು ತಾಲ್ಲೂಕು.

**ಪ್ರತಿವಾದಿಗಳು:**

1) ಆನಂದ ಗೌಡ, ಕುಂಜಣ್ಣಗೌಡರ ಮಗ, ಚೈತ್ರ ಹೇರ್‌ಡ್ರೆಸರ್ಸ್, ಮಂಗಳಾದೇವಿ, ದೇವಸ್ಥಾನ ರೋಡ್, ಎಮ್ಮೆಕರ, ಮಂಗಳೂರು.

2) ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಡಿವಿಜನಲ್ ಆಫೀಸ್, 2ನೇ ಮಹಡಿ, ರಸಿಕ ಚೇಂಬರ್ಸ್, ಸೆಂಟ್ರಲ್ ಮಾರ್ಕಟನ ಎದುರು, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಬಾಬುನಾಯ್ಕ ಇವರು ತಮ್ಮ ಮಗನಾದ ಶ್ರೀ ಸುಂದರ ಬಾಬುನಾಯ್ಕ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:12.04.2008ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–2, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2, ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–5/2009 ದಿನಾಂಕ:19ನೇ ಫೆಬ್ರವರಿ, 2009**

**ಅರ್ಜಿದಾರರು:**

1) ಕೊರಗಪ್ಪ ಗೌಡ ದಿ: ಶೇಷಪ್ಪಗೌಡರ ಮಗ.
2) ಸೀತಮ್ಮ ಕೊರಗಪ್ಪಗೌಡರ ಪತ್ನಿ.
3) ಶ್ರೀಮತಿ ಜಯಂತಿ ಕೊರಗಪ್ಪಗೌಡರ ಮಗಳು.
4) ಸತೀಶ ಕೊರಗಪ್ಪ ಗೌಡರ ಮಗ.
5) ಚೆನ್ನಮ್ಮ, ಕೊರಗಪ್ಪಗೌಡರ ಮಗಳು.
ಪವಾಡಿಕಲ್ಲ, ಪುತ್ತೂರು.

**ಪ್ರತಿವಾದಿಗಳು:**

1) ಆನಂದ ಗೌಡ, ಕುಂಜಣ್ಣಗೌಡರ ಮಗ, ಚೈತ್ರ ಹೇರ್‌ಡ್ರೆಸರ್ಸ್, ಮಂಗಳಾದೇವಿ, ದೇವಸ್ಥಾನ ರೋಡ್, ಎಮ್ಮೆಕರ, ಮಂಗಳೂರು.
2) ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಡಿವಿಜನಲ್ ಆಫೀಸ್, 2ನೇ ಮಹಡಿ, ರಸಿಕ ಚೇಂಬರ್ಸ್, ಸೆಂಟ್ರಲ್ ಮಾರ್ಕಟನ ಎದುರು, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಕೊರಗಪ್ಪಗೌಡ ಇವರು ತಮ್ಮ ಗಂಡನಾದ ಶ್ರೀ ಸದಾನಂದ ಕೊರಗಪ್ಪಗೌಡ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:12.04.2008ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–2, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–2, ಬೆಂದೂರ್ ವೆಲ್ ವೃತ್ತ, ಕಂಕನಾಡಿ, ಮಂಗಳೂರು–2, ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–6/2009: ದಿನಾಂಕ:19ನೇ ಫೆಬ್ರವರಿ, 2009**

**ಅರ್ಜಿದಾರರು:**

1) ಶ್ರೀ ದೇವಪ್ಪನಾಯ್ಕ್ ಮೃತ ಮಾಂಕುನಾಯ್ಕರ ಮಗ.
2) ಶ್ರೀಮತಿ ದೇವರ, ದೇವಪ್ಪನಾಯ್ಕರ ಮಡದಿ.
ಡೋರ್ ನಂ.3, 4ಸಿ ಪಂಜಗುಡ್ಡೆ. ಪಡ್ನೂರು ವಿಲೇಜ್, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ.

**ಪ್ರತಿವಾದಿಗಳು:**

1) ಶ್ರೀ ವಿನಯಚಂದ್ರ, ಮೃತ ದೇವಪ್ಪ ಪೂಜಾರಿಯವರ ಮಗ. ಜೆಕ್ಸಾರ ಹೌಸ್, ಬಡಗ. ಕಚಕಾರ ವಿಲೇಜ್ ಎಂಡ್ ಪೋಸ್ಟ್, ಬಂಟ್ವಾಳ ತಾಲ್ಲೂಕು.
2) ದಿ ಬ್ರಾಂಚ್ ಮೇನೇಜರ್, ದಿ ಓರಿಯೆಂಟಲ್ ಇನ್ಸೂರೆನ್ಸ್ ಕಂಪನಿ ಲಿ., ಬ್ರಾಂಚ್ ಆಫೀಸ್ 3ನೇ ಮಹಡಿ, ಕೃಷ್ಣ ಪ್ರಸಾದ್ ಬಿಲ್ಡಿಂಗ್, ಪಪ್ಪಾಸ, ಲಾಲ್‌ಬಾಗ್, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ದೇವಪ್ಪನಾಯ್ಕ್ ಇವರು ತಮ್ಮ ಮಗನಾದ ಶ್ರೀ ತಾರಾನಾಥ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:17.11.2008ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**

ಪಿ.ಆರ್.195

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ-2, ಮಂಗಳೂರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ವಿಜಯ್ ಎಸ್. ಕೊಲ್ಲಾಪುರ್, ಶುಶ್ರೂಷಕರು ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಜಿಲ್ಲಾ ಶಸ್ತ್ರಚಿಕಿತ್ಸಕರು, ಶ್ರೀಚಾಮರಾಜೇಂದ್ರ ಆಸ್ಪತ್ರೆ, ಹಾಸನ ಇವರ ಪತ್ರಸಂಖ್ಯೆ: ಎಸ್.ಸಿ.ಹೆಚ್:ಎಸ್.ಸಿ.ಸಿ.ಬಿ:1:08-09, ದಿನಾಂಕ:26.06.2008, 22.08.08 ಮತ್ತು 09.09.2008.

2) ಜಿಲ್ಲಾ ಶಸ್ತ್ರಚಿಕಿತ್ಸಕರು, ಶ್ರೀಚಾಮರಾಜೇಂದ್ರ ಆಸ್ಪತ್ರೆ, ಹಾಸನ, ಇವರ ಪತ್ರಸಂಖ್ಯೆ: ಎಸ್.ಸಿ. ಹೆಚ್.ಎಸ್.ಸಿ.ಸಿ.ಬಿ:1:08-09, ದಿನಾಂಕ:16.12.2008.

**ಪ್ರಸ್ತಾವನೆ:**

ಶ್ರೀ ವಿಜಯ್ ಎಸ್. ಕೊಲ್ಲಾಪುರ, ಶುಶ್ರೂಷಕರು, ಶ್ರೀ ಚಾಮರಾಜೇಂದ್ರ ಆಸ್ಪತ್ರೆ, ಹಾಸನ, ಇವರು ದಿನಾಂಕ:01.07.2007 ರಿಂದ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಕರ್ತವ್ಯಕ್ಕೆ ಹಾಜರಾಗುವಂತೆ ಅನೇಕ ಜ್ಞಾಪನಾ ಪತ್ರಗಳನ್ನು ಕಳುಹಿಸಿದರೂ ಸಹ ಹಾಜರಾಗಿರುವುದಿಲ್ಲ. ಆದುದರಿಂದ ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಮೇಲೆ ಓದಲಾದ (1)ರಲ್ಲಿ ಜಿಲ್ಲಾ ಶಸ್ತ್ರಚಿಕಿತ್ಸಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ನೌಕರರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ 02 ದಿನ ಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸಿದ್ದರೂ ಕರ್ತವ್ಯಕ್ಕೆ ಹಾಜರಾಗಿಲ್ಲವೆಂದು ಮೇಲೆ ಓದಲಾದ (2)ರಲ್ಲಿ ಜಿಲ್ಲಾ ಶಸ್ತ್ರಚಿಕಿತ್ಸಕರು ವರದಿ ಸಲ್ಲಿಸಿದ್ದು ನೌಕರರ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಸದರಿ ನೌಕರರು ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿ ಆಗಿದ್ದು ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿದ್ದರೂ ವರದಿ ಮಾಡಿಕೊಳ್ಳದ ಕಾರಣ ಇವರನ್ನು ಸರ್ಕಾರಿ ಸೇವೆಯಿಂದ ಬಿಡುಗಡೆಗೊಳಿಸಲು ತೀರ್ಮಾನಿಸಿದ್ದು ಈ ಆದೇಶ.

**ಆದೇಶ ಸಂಖ್ಯೆ: ಡಿ.ಪಿ.ಎನ್.(3): ಸಿ.ಆರ್.10: 2008-09, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ವಿಜಯ ಎಸ್. ಕೊಲ್ಲಾಪುರ, ಶುಶ್ರೂಷಕರು ಶ್ರೀ ಚಾಮರಾಜೇಂದ್ರ ಆಸ್ಪತ್ರೆ, ಹಾಸನ ಇವರನ್ನು 1977ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ) ನಿಯಮಾವಳಿಗಳ ನಿಯಮ 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನೇಮಕ ಮಾಡಿದ ಹುದ್ದೆಗೆ ಯೋಗ್ಯರಲ್ಲವೆಂದು ನಿರ್ಣಯಿಸಿ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಬಿಡುಗಡೆಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನಕರ್**

ಪಿ.ಆರ್.196

ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್–40/2008: ದಿನಾಂಕ:23ನೇ ಜೂನ್, 2008**

**ಅರ್ಜಿದಾರರು:**

1) ಮಂಜಪ್ಪ ಬಿನ್ ಸತ್ಯಪ್ಪ
2) ಹಾಲೇಶ್ ಬಿನ್ ಸತ್ಯಪ್ಪ
3) ಚಂದ್ರಪ್ಪ ಬಿನ್ ಸತ್ಯಪ್ಪ

ಇವರೆಲ್ಲರ ವಾಸ: ನವಿಲೆ, ಬಸವಾಪುರ, ಭದ್ರಾವತಿ.

**ಪ್ರತಿವಾದಿಗಳು:**

1) ಎಸ್.ವಿ. ನಂಜುಂಡಪ್ಪ, ನಂಜುಂಡೇಶ್ವರ ರೈಸ್, ಇಂಡಸ್ಟ್ರೀಸ್, ಮಾಲೀಕರು, ಲೋಕೇಶ್ ನಿಲಯ, ಗಾಂಧಿನಗರ, ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರರಾದ ಮಂಜಪ್ಪ ಮತ್ತು ಇತರರು ಇವರು ದಿ: ಹನುಮಪ್ಪ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:23.07.2006ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಅಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್‌ಕುಮಾರ್**

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್–39/2008: ದಿನಾಂಕ:23ನೇ ಜೂನ್, 2008**

**ಅರ್ಜಿದಾರರು:**

1) ಕಸ್ತೂರಮ್ಮ ಕೋಂ ನೀಲಕಂಠಪ್ಪ.
2) ಬಸವರಾಜ್ ಎನ್.ಆರ್. ಬಿನ್ ನೀಲಕಂಠಪ್ಪ
3) ರೂಪಾ ಎನ್.ಆರ್. ಬಿನ್ ನೀಲಕಂಠಪ್ಪ, ಇವರ ವಾಸ: ಜಯನಗರ, 8ನೇ ಕ್ರಾಸ್, ಶಿಕಾರಿಪುರ.

**ಪ್ರತಿವಾದಿಗಳು:**

1) ರಾಮಚಂದ್ರಪ್ಪ ಬಿನ್ ಹುಚ್ಚಪ್ಪ ನೇಕಾರರು ಮತ್ತು ಲಾರಿ ಮಾಲೀಕರು, ವಿದ್ಯಾನಗರ, ಶಿಕಾರಿಪುರ, ತಾ: ಶಿವಮೊಗ್ಗ.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರರಾದ ಕಸ್ತೂರಮ್ಮ ಇವರು ದಿ: ನೀಲಕಂಠಪ್ಪ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:08.05.2006ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಅಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

**ಎಸ್. ವಿಜಯ್‌ಕುಮಾರ್**

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರು, ಶಿವಮೊಗ್ಗ.

